# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 169 |
| ಸದಸ್ಯರ ಹೆಸರು | ಶ್ರೀ ಡಾ॥ ತೇಜಸ್ವಿನಿಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 07-12-2020 |
| ಉತ್ತರಿಸಬೇಕಾದ ಸಚಿವರು | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು |

| ಪ್ರಶ್ನೆ | ಉತ್ತರ |
|---|---|
| **ಅ)** ಕೋವಿಡ್-19 ಹಿನ್ನೆಲೆಯಲ್ಲಿ ಕಡ್ಡಾಯವಾಗಿ ಮುಚ್ಚಲ್ಪಟ್ಟಿರುವ ಶಾಲೆಯಿಂದಾಗಿ ಮನೆಯಲ್ಲಿಯೇ ಇರುವ ಮಕ್ಕಳ ಪೋಷಕರ ಮನೋಬಲ ವೃದ್ಧಿಗೆ ಸರ್ಕಾರವು ಕೈಗೊಂಡಿರುವ ಕ್ರಮಗಳೇನು; | ಕೋವಿಡ್-19 ವೈರಾಣು ಹರಡುವಿಕೆಯ ಹಿನ್ನೆಲೆಯಲ್ಲಿ ನಿಗದಿತ ಕಾರ್ಯಸೂಚಿಯಂತೆ ಶಾಲೆಗಳಲ್ಲಿ ಶೈಕ್ಷಣಿಕ ಚಟುವಟಿಕೆಗಳು ಪ್ರಾರಂಭವಾಗಿರುವುದಿಲ್ಲ.<br>ವಿದ್ಯಾರ್ಥಿಗಳಿಗೆ ಸ್ವಕಲಿಕಾ ಅವಕಾಶಗಳನ್ನು ಒದಗಿಸುವ ನಿಟ್ಟಿನಲ್ಲಿ ದೂರದರ್ಶನಗಳಿಗೆ ಚಂದನ ವಾಹಿನಿ ಮೂಲಕ ಪ್ರೌಢ ಶಾಲಾ ವಿದ್ಯಾರ್ಥಿಗಳಿಗೆ ದಿನಾಂಕ:20-07-2020ರಿಂದ ವಿಡಿಯೋ ಪಾಠಗಳನ್ನು ಪ್ರಾರಂಭಿಸಲಾಗಿದೆ.<br>ಚಿಕ್ಕಮಕ್ಕಳಿಗಾಗಿ ಯೂ-ಟ್ಯೂಬ್ ಚಾನೆಲ್‌ನಲ್ಲಿ ಮಕ್ಕಳವಾಣಿ ಕಾರ್ಯಕ್ರಮದಲ್ಲಿ 40ಕ್ಕೂ ಹೆಚ್ಚು ಎಪಿಸೋಡ್‌ಗಳನ್ನು ಪ್ರಸಾರ ಮಾಡಲಾಗಿದೆ. 6-8ನೇ ತರಗತಿ ಮಕ್ಕಳಿಗೆ ವಿಡಿಯೋ ಪಾಠಗಳನ್ನು ಸಿದ್ಧಪಡಿಸಲಾಗಿದ್ದು, ಪ್ರಸಾರ ಪ್ರಾರಂಭಿಸಲಾಗುತ್ತಿದೆ. |
| **ಆ)** ಪ್ರಸ್ತುತ ಡಿಸೆಂಬರ್ ಹಾಗೂ ಜನವರಿ ತಿಂಗಳುಗಳು ಅತ್ಯಂತ ಶೀತದಾಯಕವಾಗಿದ್ದು, ಕೋವಿಡ್-19ರ 2ನೇ ಅಲೆಯು ವೇಗವಾಗಿ ಮಾರಣಾಂತಿಕವಾಗಿ 'ವ್ಯಾಪಿಸುತ್ತಿರುವ ಹಿನ್ನೆಲೆಯಲ್ಲಿ ವಿದ್ಯಾರ್ಥಿಗಳ ಭವಿಷ್ಯದ ಕುರಿತು ಸರ್ಕಾರ ಕೈಗೊಂಡಿರುವ ನಿರ್ಣಯಗಳೇನು; | ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳಿಗೆ ಅನುಕೂಲ ಕಲ್ಪಿಸುವ ದೃಷ್ಟಿಯಿಂದ ಸ್ಥಳೀಯವಾಗಿ ಅವರು ವಾಸಿಸುವ ಗ್ರಾಮಗಳಲ್ಲಿಯೇ ಬಯಲು ಶಾಲೆಗಳನ್ನು 'ವಿದ್ಯಾಗಮ' ಯೋಜನೆಯ ಮೂಲಕ ನಡೆಸಲಾಗಿದೆ. ಈ ಯೋಜನೆಯನ್ನು ಸೂಕ್ತ ಬದಲಾವಣೆಗಳೊಂದಿಗೆ ಮರು ಜಾರಿಗೊಳಿಸಲು ಯೋಜಿಸಲಾಗಿದೆ. |
| **ಇ)** ವಿದ್ಯಾರ್ಥಿಗಳ ಭವಿಷ್ಯದ ದೃಷ್ಟಿಯಿಂದ 01-9ನೇ ತರಗತಿಯವರೆಗೆ ಉತ್ತೀರ್ಣ ಮಾಡಿ ಶೈಕ್ಷಣಿಕ ಉನ್ನತೀಕರಣ ಸೂಕ್ತವೆನಿಸಿದ್ದರೂ ಎಸ್.ಎಸ್.ಎಲ್.ಸಿ ಹಾಗೂ ಪಿ.ಯು.ಸಿ ಪರೀಕ್ಷೆಗಳಿಗೆ ಕಡ್ಡಾಯವಾಗಿ ತರಬೇತಿ ಹಾಗೂ ಪರೀಕ್ಷೆ ಸೂಕ್ತವಾಗಿದ್ದು ಈ ಬಗ್ಗೆ ಸರ್ಕಾರದ ನಿಲುವೇನು? | ಎಸ್.ಎಸ್.ಎಲ್.ಸಿ ಮತ್ತು ಪಿ.ಯು.ಸಿ ತರಗತಿಗಳು ಸೇರಿದಂತೆ ಉನ್ನತ ತರಗತಿಗಳನ್ನು ಪ್ರಾರಂಭಿಸಲು ಇಲಾಖೆ ಸಿದ್ಧತೆ ಮಾಡಿಕೊಂಡಿದೆ ಹಾಗೇಯೇ ಪರೀಕ್ಷೆಗಳನ್ನು ನಡೆಸಲು ಸಹ ಸಿದ್ಧವಿದೆ. ಆರೋಗ್ಯ ಇಲಾಖೆಯ ತಜ್ಞರ ಸಮಿತಿಯ ವರದಿಯ ಆಧಾರದ ಮೇಲೆ ಮುಂದಿನ ಕ್ರಮವಹಿಸಲಾಗುವುದು. |

ಇಡಿ 152 ಪಿಜಿಸಿ 2020

[ಎಸ್.ಸುರೇಶ್ ಕುಮಾರ್]
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು.